# ಜಗತ್ ಜ್ಯೋತಿ

( ಕವನ ಸಂಕಲನ )

~ S.S.Kannadiga



# ಜಗತ್ ಜ್ಯೋತಿ : ( ಕವನ ಸಂಕಲನ )

ಲೇಖಕರು : ಎಸ್.ಎಸ್.ಕನ್ನಡಿಗ ( ಶರಣು ಕನ್ನಡಿಗ )

ಊರು : ಮುಕ್ತಾ ಗುಡದೂರ

ಪೋಸ್ಟ್ : ಮಾದಾಪೂರ

ತಾ : ಕುಷ್ಟಗಿ

ಜಿ : ಕೊಪ್ಪಳ

ಪಿನ್ ಕೋಡ್ : ೫೮೩೨೭೮

ಮೋ ಸಂಖ್ಯೆ : ೭೦೧೯೩೦೯೯೯೮ ( ವಾಟ್ಸಪ್ ಮಾತ್ರ )

ಬಿಡುಗಡೆ ದಿನಾಂಕ : ೨೦೨೧ – ಅಕ್ಟೋಬರ್

ಹಕ್ಕುಗಳು : ಲೇಖಕರು

ಬೆಲೆ : ಉಚಿತ

ಪುಟಗಳು : ೭೩

ಭಾಷೆ : ಕನ್ನಡ

# JAGAT JYOTI : Written by :

## S.S.Kannadiga ( Sharanu Kannadiga )

**At : Gudadur (M)**

**Post : Madapur**

**Tq : Kushtagi**

**Dist : Koppal**

**Mobile : 7019309698 ( WhatsApp only )**



**Release date : 2021 – October**

**Price : $$$ ( Free )**

**Pages : 73**

**Language : Kannada**

## ವಿಶೇಷ ಸೂಚನೆ :

೦೧. ಈ 'ಜಗತ್ ಜ್ಯೋತಿ' ಕವನ ಸಂಕಲನವನ್ನು ಉಚಿತವಾಗಿ ಪ್ರತಿಯೊಬ್ಬರು ಓದುವಂತೆ ಮಾಡಲಾಗಿದೆ.

೦೨. ಹಕ್ಕುಗಳು ಲೇಖಕರದ್ದು ಮಾತ್ರ.

೦೩. ಈ ಕವನ ಸಂಕಲನದ ಹೆಸರಿನಲ್ಲಿ ಯಾರಾದರೂ ನಿಮ್ಮ ಹತ್ತಿರ ಹಣವನ್ನು ಕೇಳಿದರೆ ನೀಡಬೇಡಿ.

೦೪. ಈ ಕವನ ಸಂಕಲನವನ್ನು ಓದುವುದಕ್ಕೆ ಯಾವುದೇ ಹಣವನ್ನು ಪಾವತಿಸುವ ಅವಶ್ಯಕತೆ ಇರುವುದಿಲ್ಲ.

೦೫. ನಿಮಗೆ ಈ ಕವನ ಸಂಕಲನ ಇಷ್ಟವಾದರೆ ಇನ್ನೊಬ್ಬರಿಗೆ ಓದಲು ಸೂಚಿಸಿ.

೦೬. ನೀವು ಈ ಕವನ ಸಂಕಲನವನ್ನು ಓದಿ ಮನಸಾರೆ ಇಷ್ಟಪಟ್ಟು ಹಣ ನೀಡಲು ಇಚ್ಛಿಸಿದರೆ, ನಿಮ್ಮ ಹತ್ತಿರದ ವೃದ್ಧರಿಗೆ,ಅನಾಥರಿಗೆ,ಬಡವರಿಗೆ 'ಜಗತ್ ಜ್ಯೋತಿ' ಕವನ ಸಂಕಲನದ ಹೆಸರಿನಲ್ಲಿ ಸಹಾಯ ಮಾಡಬಹುದು.

೦೭. ಪ್ರತಿಯೊಬ್ಬರಿಗೂ ಅಕ್ಷರದ ಅವಶ್ಯಕತೆ ತುಂಬಾ ಇದೆ. ಆಗಾಗಿ, ನೀವು "ಈ ಕವನ ಸಂಕಲನವನ್ನು ಓದಿದಾಗ ಸಮಯ ವ್ಯರ್ಥವಾಗಿಲ್ಲ,ಈ ಪುಸ್ತಕಕ್ಕೆ ಹಣ ಪಾವತಿಸಬೇಕು" ಎನ್ನುವ ಭಾವನೆ ನಿಮ್ಮಲ್ಲಿ ಮೂಡಿದರೆ, ನಿಮ್ಮ ಸಮೀಪದ ಬಡಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸೌಲಭ್ಯಗಳನ್ನು ಒದಗಿಸಿಕೊಡಿ.

೦೮. ನೀವು ಈ 'ಜಗತ್ ಜ್ಯೋತಿ' ಕವನ ಸಂಕಲನದ ಹೆಸರಿನಲ್ಲಿ ಯಾರಿಗಾದರೂ ಸಹಾಯ ಮಾಡಿದ್ದರೆ ನನಗೆ 'ವಾಟ್ಸಪ್ಪ್' ಮೂಲಕ ಚಿತ್ರ ಅಥವಾ ದೃಶ್ಯಗಳನ್ನು ಕಳುಹಿಸಿಕೊಡಬಹುದು.

೦೯. ನೀವು ಕಳುಹಿಸಿಕೊಟ್ಟ ಚಿತ್ರ ಮತ್ತು ದೃಶ್ಯಗಳನ್ನು 'ಜಗತ್ ಜ್ಯೋತಿ ಪುಸ್ತಕ ' ಫೇಸ್ಬುಕ್ ಪುಟದಲ್ಲಿ ಹಾಕಲಾಗುವುದು.

೧೦. ನಿರ್ಗತಿಕರಿಗೆ ಸಹಾಯ ಮಾಡುವುದು ನಿಮ್ಮಿಷ್ಟಕ್ಕೆ ಬಿಟ್ಟಿದ್ದು ಯಾರಿಗೂ ಒತ್ತಾಯವಿಲ್ಲ.ಈ ಪುಸ್ತಕಕ್ಕೆ ಹಣ ಪಾವತಿಸುವ ಮನಸ್ಸಿದ್ದರೆ, ನನಗೆ ಕೊಡುವ ಬದಲು ನಿಮ್ಮ ಸಮೀಪದ ಬಡವರಿಗೆ ಸಹಾಯ ಮಾಡಿ.

# ಲೇಖಕರ ಮಾತು

ಈ ಪ್ರಪಂಚದ ಅಜರಾಮರ ಪಟ್ಟಿಯಲ್ಲಿ ಮತ್ತು ಕ್ಷಣ,ಕ್ಷಣಕ್ಕೂ ನೆನಸಿಕೊಳ್ಳಬೇಕಾದ ಹಾಗೂ ಎಂದೆಂದಿಗೂ ಮರೆಯಲಾರದ ವ್ಯಕ್ತಿಗಳೆಂದರೆ, ಅದು ಗೌತಮ ಬುದ್ಧ,ವಿಶ್ವಗುರು ಬಸವಣ್ಣ ಹಾಗೂ ಡಾ || ಬಿ.ಆರ್.ಅಂಬೇಡ್ಕರ್. ಈ ಹಿಂದೆ ಇವರುಗಳ ಬಗ್ಗೆ ಹಲವಾರು ಭಾಷೆಯಲ್ಲಿ ಹಲವಾರು ಪುಸ್ತಕಗಳು ಹುಟ್ಟಿಕೊಂಡಿವೆ,ಹುಟ್ಟಿಕೊಳ್ಳುತ್ತಿವೆ. ಯಾರನ್ನಾದರೂ ಈ ಜಗತ್ತು ಮರೆತಿಲ್ಲ ಅವರನ್ನು  ಓದುತ್ತದೆ,ನೆನಸಿಕೊಳ್ಳುತ್ತದೆ,ಬರೆಯುತ್ತದೆ ಎಂದರೆ, ನನ್ನ ಪ್ರಕಾರ ಈ ಭೂಮಿಯ ಮೇಲೆ ಯಾರು ಮಾಡದ ಕೆಲಸವನ್ನು ಅವರು ಮಾಡಿ ಹೋಗಿದ್ದಾರೆ ಎಂದರ್ಥ.ಆ ತರಹದ ಕೆಲಸವನ್ನು,ಸಾಧನೆಯನ್ನು ಬುದ್ಧ,ಬಸವ,ಅಂಬೇಡ್ಕರ್ ಸಹ ಮಾಡಿ ಹೋಗಿದ್ದಾರೆ. ಆಗಾಗಿ, ಪ್ರತಿಕ್ಷಣವೂ ಕೂಡ ಈ ಪ್ರಪಂಚ ಅವರ ಬಗ್ಗೆ ಬರೆಯುತ್ತದೆ,ಓದುತ್ತದೆ,ನೆನಸಿಕೊಳ್ಳುತ್ತದೆ.

ನಾನು ಪುಸ್ತಕ ಓದುವ ಹವ್ಯಾಸಿ.ನಾನು ಕೂಡ ಎಂದೆಂದಿಗೂ ಮರೆಯಲಾರದಂತಹ ಸ್ವತಂತ್ರಕ್ಕಾಗಿ ಹೋರಾಟ ಮಾಡಿದವರು,ಸಮಾಜವನ್ನು ಬದಲಾವಣೆ ಮಾಡಿದವರು,ಅನ್ಯಾಯಕ್ಕೆ ಒಳಗಾದವರಿಗೆ ನ್ಯಾಯ ಕೊಡಿಸಿದವರು,ಇತಿಹಾಸದ ಚಿಂತಕರು ಹಾಗೂ ಮುಂತಾದವರ ಜೀವನ ಚರಿತ್ರೆಯನ್ನು ಅವಾಗ,ಅವಾಗ ಓದುತ್ತಿರುತ್ತೇನೆ.ಇಂತಹವರ ಪಟ್ಟಿಯಲ್ಲಿ ಬುದ್ಧ,ಬಸವ,ಅಂಬೇಡ್ಕರ್ ಸಹ ಬರುತ್ತಾರೆ.ಇವರ ಬಗ್ಗೆ ಓದುತ್ತಾ ಹೋದಾಗ ನನ್ನ ಮನಸ್ಸಿನಲ್ಲಿ ಬಹಳಷ್ಟು ವಿಚಾರಗಳು ಹುಟ್ಟಿಕೊಂಡವು.ಇವರ ಬಗ್ಗೆ ಸಣ್ಣಪುಟ್ಟ ಕವಿತೆಗಳು ಸಹ ಮನಸ್ಸಿನಲ್ಲಿ ಹುಟ್ಟಿಕೊಂಡವು, ಅವುಗಳನ್ನು ಬರೆಯಲು ಶುರುಮಾಡಿದೆ.ಈ ಕವಿತೆಗಳನ್ನು ಬರೆಯುವಾಗ ಮನಸ್ಸಿನಲ್ಲಿ ಖುಷಿಯಿತ್ತು. ಮೊದ,ಮೊದಲು **30** ಕ್ಕೂ ಹೆಚ್ಚು ಕವಿತೆಗಳನ್ನು ಬರೆದು ಮತ್ತೊಮ್ಮೆ ಓದಿದೆ.ಇದಾದ ನಂತರ ಇವರ ಬಗ್ಗೆ ಬರೆಯುವುದನ್ನು ಕೆಲವು ದಿನಗಳು ನಿಲ್ಲಿಸಿ ಓದುವುದು ಮತ್ತು ಪ್ರಚಲಿತ ಘಟನೆಗಳ ಬಗ್ಗೆ ತಿಳಿದುಕೊಳ್ಳುವ ಹವ್ಯಾಸ ಮಾಡಿಕೊಂಡೆ.ಆದರೆ, ಬಹಳ ದಿನಗಳ ನಂತರ ತ್ರಿಬಿ ವಿಚಾರಗಳ ಮೇಲೆ ಬರೆದ ಕವಿತೆಗಳ ಪುಸ್ತಕವನ್ನು ತೆಗೆದು ನೋಡಿದೆ ಅದರಲ್ಲಿದ್ದ ತಪ್ಪುಗಳನ್ನು ಸರಿಪಡಿಸಿದೆ.ತದನಂತರ ಅವುಗಳನ್ನು ಮುದ್ರಣ ಮಾಡಿಸುವ ಕುರಿತು ಯೋಚಿಸಿದೆ.ಪ್ರಕಾಶಕರನ್ನು ಭೇಟಿಯಾಗುವ ಮುನ್ನ, ಕೆಲವು ಕವಿಗಳ ಹತ್ತಿರ ಹೋದೆ ಆ ಕವಿತೆಗಳನ್ನು ತಗೊಂಡು ಅವರಿಗೆ ತೋರಿಸಿದೆ.**100** ಕ್ಕೆ **30** ರಷ್ಟು ಕವಿಗಳು ಋಣಾತ್ಮಕ ವಿಚಾರಗಳನ್ನು ವ್ಯಕ್ತಪಡಿಸಿದರು ಅವುಗಳನ್ನು ಬಿಸಾಕಾವುದೆ ಉತ್ತಮವೆಂದರು.ಆಗಾಗಿ, ಸ್ವಲ್ಪ ದಿನಗಳು ಸುಮ್ಮನೆ ಇದ್ದೆ ಈ ಪುಸ್ತಕ ಮುದ್ರಣ ಮಾಡಿಸುವುದರ ಬಗ್ಗೆ ಯೋಚಿಸಿರಲಿಲ್ಲ.ನಂತರ ನನ್ನ ತಲೆಗೆ ಬಂದ ವಿಚಾರವೇ ಇವುಗಳನ್ನು ಬಿಸಾಕುವುದಕ್ಕಿಂತ ಇ - ಪುಸ್ತಕವನ್ನಾಗಿ ಬಿಡಬೇಕೆಂಬುದು ಅದರ ಸಲುವಾಗಿ ಇ - ಪುಸ್ತಕವನ್ನಾಗಿ ಮಾಡಿದ್ದೇನೆ ಎಲ್ಲರಿಗೂ ಉಚಿತವಾಗಿ ಸಿಗುವಂತೆ ನಿಮ್ಮ ಮುಂದೆ ಇಡುತ್ತಿದ್ದೇನೆ.ದಯವಿಟ್ಟು, ಓದಿ ಈ ಪುಸ್ತಕದ ಬಗ್ಗೆ ನಿಮಗಿರುವ ಅಭಿಪ್ರಾಯಗಳನ್ನು ಹಂಚಿಕೊಳ್ಳಿ.ನಿಮ್ಮ ಅಭಿಪ್ರಾಯ ಋಣಾತ್ಮಕವಾಗಿದ್ದರೂ ತೊಂದರೆ ಇಲ್ಲ ಅದನ್ನು ಒಳ್ಳೆಯ ಮನಸ್ಸಿನಿಂದ ಸ್ವೀಕರಿಸುವೆ.ನನ್ನ ತಪ್ಪುಗಳನ್ನು ತಿದ್ದಿಕೊಂಡು ಮುಂದಿನ ಬಾರಿ ಬರೆಯುವಂತ ಕಥೆ,ಕವಿತೆ,ಲೇಖನಗಳನ್ನು ನಿಮ್ಮೆಲ್ಲರ ಮನ ಮೆಚ್ಚುವಂತೆ ಬರೆಯುವೆ.

ಈ ಪುಸ್ತಕವನ್ನು ಪ್ರತಿಯೊಬ್ಬರು ಓದಬಹುದು. ಯಾವುದೇ ವ್ಯಕ್ತಿ,ಜಾತಿ,ಧರ್ಮ,ಮತ,ಪಂಥ ಅಥವಾ ಭಾಷೆಯ ವಿರುದ್ಧವಿಲ್ಲ.ಸರಳವಾದ ಕನ್ನಡ ಭಾಷೆಯಲ್ಲಿದೆ.ಈ ಸರಳವಾದ ಕವಿತೆಗಳನ್ನು ಓದುವ ಮುಖಾಂತರ ಬುದ್ಧ,ಬಸವ,ಅಂಬೇಡ್ಕರ್ ರವರ ವಿಚಾರ ಮತ್ತು ಜೀವನವನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು.ಈ ಕವಿತೆಗಳನ್ನು ಓದುವಾಗ ಬೇಸರ ತರುವುದಿಲ್ಲ,ಓದಿದ ನಂತರ ಒಂದೇ ವಿಷಯದ ಮೇಲೆ ಓದಿದೆ ಎಂಬ ವಿಚಾರ ತಲೆಯಲ್ಲಿ ಬರಬಹುದು ಅಷ್ಟೇ.ಇನ್ನೂ ಬಹಳ ಕವಿತೆಗಳನ್ನು ಬೇರೆ ವಿಷಯಗಳ ಮೇಲೆ ಬರೆದಿದ್ದೇನೆ,ಅವುಗಳನ್ನು ಮುಂದಿನ ದಿನಗಳಲ್ಲಿ ನಿಮ್ಮ ಮುಂದೆ ತರಲಾಗುವುದು.ಈ ಕವನಸಂಕಲನದಲ್ಲಿ ಯಾವುದಾದರು ಕವಿತೆ ನಿಮ್ಮ ಮನಸ್ಸಿಗೆ ನೋವುಂಟು ಮಾಡಿದರೆ ತಿಳಿಸಿ ಅವುಗಳನ್ನು ತಿದ್ದಲಾಗುವುದು.

ಇಂತಿ ನಿಮ್ಮ ಪ್ರೀತಿಯ

ಶರಣು ಕನ್ನಡಿಗ

**(S.S.KannadIga)**

# ಪರಿವಿಡಿ

## ೧. ಶಿಕ್ಷಣದ ಶಕ್ತಿ ಅಂಬೇಡ್ಕರ್ ಗುರುಗಳು

ನೊಂದವರ ಹೃದಯದಲ್ಲಿ

ಅರಳಿದ ನಂದಾದೀಪ

ಭಾರತದ ಜ್ಞಾನ ಮಂದಿರದಲ್ಲಿ

ಬೆಳಗುತ್ತಿರುವ ಆಶಾದೀಪ ||

ಪುಸ್ತಕದಲ್ಲಿ ಕಾಣುತ್ತಿರುವ

ಜ್ಞಾನದಲ್ಲಿ ಮೇರೆಯುತ್ತಿರುವ

ಭಾರತದ ಮನೆ,ಮನೆಯಲ್ಲಿ

ಆರದೇ ಉರಿಯುತ್ತಿರುವ

ಶೋಷಿತರ ದೀಪ ||

ಅನ್ಯಾಯದ ವಿರುದ್ಧ ಧ್ವನಿಯ ಎತ್ತುವ

ಪ್ರತಿಯೊಬ್ಬನಲ್ಲೂ ಅಚ್ಚ,ಅಳಿಯದೇ

ಓದುವ ಯುವಕರ ಮನಸಲ್ಲಿ

ಕೂತಿರುವ ಕ್ರಾಂತಿ ದೀಪ ||

ಭಾರತವೇ ಕೊಂಡಾಡುವಂತೆ

ವಿಶ್ವವೇ ತಿರುಗಿ ನೋಡುವಂತೆ

ಎಂದೆಂದಿಗೂ ಕಣ್ಣಿಗೆ ಕಾಣುವಂತೆ

ಕಂಡ,ಕಂಡಲ್ಲಿ ಬೆಳಗುತ್ತಿರುವ

ಜ್ಞಾನದ ದೀಪ ||

ನೀನೆ ನಮ್ಮ ಶಿಕ್ಷಣ ದೀಪ

ಸಮಾನ ಶಿಕ್ಷಣಕ್ಕೆ

ಶಕ್ತಿಯಾಗಿರುವ,ಮಾದರಿಯಾಗಿರುವ

ಅಂಬೇಡ್ಕರ್ ದೀಪ ||

## ೨. ದಲಿತ ನಾಯಕರು

ಭೀಮ ಭಾರತದ ವಿಚಾರವನ್ನು ಹೇಳಿ

ಪರಿಚಯವಾದವರು ದುಷ್ಟರು.

ಅಂಬೇಡ್ಕರ್ ಸಂಘಟನೆ ಕಟ್ಟುವ ನೆಪದಲ್ಲಿ

ಹತ್ತಿರವಾದವರು ಕ್ರಿಮಿಗಳು.

ಹಿಂದುಳಿದವರಿಗೆ ಸಹಾಯ ಮಾಡುವ ನಾಟಕದಲ್ಲಿ

ನಮ್ಮಂತವರನ್ನು ಉಪಯೋಗಿಸಿಕೊಂಡವರು ನೀಚರು.

ಜಾತ್ಯತೀತ ಸಮಾನತೆಯ ರಾಷ್ಟ್ರ ನಿರ್ಮಾಣ ಮಾಡಬೇಕೆಂದು,

ನಮ್ಮಿಂದ ನಮ್ಮವರನ್ನೆಲ್ಲ ಬಳಸಿಕೊಂಡವರು.

ಭ್ರಷ್ಟರನ್ನು ಮಟ್ಟ ಹಾಕುವ ತಂತ್ರ ರೂಪಿಸೋಣವೆಂದು,

ನಮ್ಮಿಂದ ಪ್ರಚಾರ ಗಿಟ್ಟಿಸಿಕೊಂಡವರು.

ನಮ್ಮನ್ನು,ನಮ್ಮವರನ್ನು ಬಳಸಿಕೊಂಡರು

ರಾಷ್ಟ್ರದ ಸಮಸ್ಯೆಗಳ ಪರಿಹಾರಕ್ಕಾಗಿಯಲ್ಲ,

ತಮ್ಮ ಮನೆಯ ಉದ್ಧಾರಕ್ಕಾಗಿ.

(ಕೆಲವರಿಗೆ ಮಾತ್ರ )

# ೩. ಕತ್ತಲಲ್ಲಿ ಓದುವ ಚಂದಿರ

ಗ್ರಂಥಾಲಯದಲ್ಲಿರುವ ಮೌನ ಸಿಂಹವೇ

ಶೂದ್ರರಿಗಾಗಿ ಓದುವುದನ್ನು ನಿಲ್ಲಿಸಲಿಲ್ಲ.

ಹೊರಗಡೆ ಬಿಟ್ಟರೆ ಮಾತಿನ ಸಿಂಹವೇ

ನಿನ್ನ ಮಾತು ತುಳಿತದಲ್ಲಿರುವರ ಧ್ವನಿಯಾಯಿತು.

ಎಲ್ಲರೂ ಊಟ ಮಾಡಿ ಮಲಗುವ ಸಮಯದಲ್ಲಿ

ನೀನು ಗ್ರಂಥಾಲಯವನ್ನು ಹುಡುಕುತ್ತಿರುವ ಚಂದಿರನಾದೆ,

ನೀನು ರಾತ್ರಿಯಲ್ಲ ಚಂದಿರನಾಗಿ ಓದಿದ ಫಲವೇ

ಸೂರ್ಯನಾಗಿ ಇಂದು ನಮಗೆ ಬೆಳಕು ಸಿಕ್ಕಿದೆ.

ನಿನಗೆ ಗುಣಮಟ್ಟದ ಶಿಕ್ಷಣ ಸಿಗಲಿಲ್ಲ

ಆದರೂ ಛಲ ಬಿಡದೇ ಕಲಿತೆ

ಶೋಷಿತರ ಧ್ವನಿಯಾಗಲು,

ಅದರಿಂದಾಗಿಯೇ ನಾವು ಉನ್ನತ ಶಿಕ್ಷಣ ಪಡೆದುಕೊಂಡು

ಸಮಾಜದಲ್ಲಿ ಉತ್ತಮ ಸ್ಥಾನ ಮಾನ ಪಡೆದುಕೊಂಡಿರುವೆವು.

ಮೈಯಲ್ಲಿ ಹರಕು ಬಟ್ಟೆ ಹಾಕಿಕೊಂಡು

ಕಣ್ಣಿಗೆ ಬೇಕಾಗಿರುವ ನಿದ್ದೆ ಬಿಟ್ಟೆ,

ಅದರ ಪ್ರತಿಫಲವೇ, ಹೊಟ್ಟೆ ತುಂಬಾ ಊಟ ಮಾಡಿ

ಕಣ್ಣು ತುಂಬಾ ನಿದ್ದೆ ಮಾಡುತ್ತಿರುವೇವು.

## ೪. ಭೀಮಭಾರತದ ಕನಸ್ಸು

ನಮ್ಮಿಂದ ಇವರಿಗೆ

ಇವರಿಂದ ಅವರಿಗೆ

ತಿಳಿಸಬೇಕಿದೆ ಭೀಮಭಾರತವನ್ನು

ನಮ್ಮೊಟ್ಟಿಗೆ ಬರಲು ಸಿದ್ದವಿರುವಿರಾ ?

ಅದಕ್ಕಾಗಿ ನಿಮ್ಮ ವಿಶ್ವಾಸ,ನಂಬಿಕೆಯನ್ನು

ನಮಗೆ ಸಂವಿಧಾನದ ವಿಚಾರಗಳ

ಮೂಲಕ ಹೊತ್ಕೊಂಡು ಬಂದು ಕೊಡುವಿರಾ ?

ಹೊಡೆದು ಹೋಗಿದೆ ಭಾರತ

ಕಟ್ಟಬೇಕಿದೆ ಭೀಮಭಾರತ

ದೃಢ ವಿಶ್ವಾಸದಿಂದ

ಕಟ್ಟಲು ಬರುವಿರಾ ?

ಅರ್ಧ ಕಟ್ಟಿ

ಮನೆಗೆ ಮರಳುವುರಾಗದೆ

ಪೂರ್ಣ ಕಟ್ಟಿ

ಗೃಹಪ್ರವೇಶ ಮಾಡುವರಾಗುವಿರಾ ?

ತಿಳಿಸಿ,ತಿಳಿಸಿ

ನೀವು ದಯವಿಟ್ಟು ತಿಳಿಸಿ

ನಮ್ಮ ಜೊತೆ ಭೀಮಭಾರತ

ಕಟ್ಟಲು ಬರುವಿರಾ ?

## ೫. ಕೈಲಾಗದವರು

ನೀನು ಬಡತನಕ್ಕೆ ಅಂಜಿ

ಓದುವುದು ನಿಲ್ಲಿಸಲಿಲ್ಲ.

ಆದರೆ, ನಾವೆಲ್ಲರೂ

ನೀ ಕೊಟ್ಟಿರುವ ಭಿಕ್ಷೆ ಇದ್ದರೂ

ಓದುವುದನ್ನೇ ನಿಲ್ಲಿಸಿದ್ದೇವೆ.

ನೀನು ಓದುವಾಗ

ಸಾವಿರಾರು ಅಡೆತಡೆಗಳು ಬಂದವು,

ಛಲಬಿಡದೇ ಇತಿಹಾಸ ಸೃಷ್ಟಿಸಿದೆ.

ನಮಗೆ ಪ್ರತಿಯೊಂದು ಸೌಲಭ್ಯವಿದ್ದರೂ

ಓದುವುದೇ ಕ್ಲಿಷ್ಟಕರವಾಗಿ ಕೂತಿದೆ..!

ನೀನು ಓದುವ ವಯಸ್ಸಿನಲ್ಲಿಯೇ

ಶಿಕ್ಷಣದ ಬಗ್ಗೆ ಅರಿವು ಮೂಡಿಸಿದೆ.

ದುರಂತವೆಂದರೆ, ನಿನ್ನ ಆದರ್ಶವನ್ನಾಗಿ

ಮಾಡಿಕೊಂಡ ನಾವೇ ಶಿಕ್ಷಣದಿಂದ

ದೂರ ಉಳಿದಿದ್ದೆವೆ.

## ೬. ಬೇಕಾಗಿದ್ದು ಬೇಡವಾಯಿತು

ನನ್ನ ಜನರಿಗೆ

ಗೌತಮ ಬುದ್ಧ ಬೇಕು

ಬೌದ್ಧ ಧಮ್ಮ ಬೇಕು

ಬುದ್ಧ ಪೂರ್ಣಿಮಾ ಬೇಕು

ಆದರೆ ಬುದ್ಧನ ತತ್ವಗಳು

ಮಾತ್ರ ಬೇಡವಾಯಿತು

ನನ್ನ ಜನರಿಗೆ

ಮಾನವತಾವಾದಿ ಬಸವಣ್ಣ ಬೇಕು

ಲಿಂಗಾಯತ ಧರ್ಮ ಬೇಕು

ಬಸವಣ್ಣನ ಜಯಂತಿ ಬೇಕು

ಆದರೆ ಬಸವಣ್ಣನ ಹಾದಿ

ಮಾತ್ರ ಬೇಡವಾಯಿತು

ನನ್ನ ಜನರಿಗೆ

ಚಿಂತಕ ಅಂಬೇಡ್ಕರ್ ಬೇಕು

ಅಂಬೇಡ್ಕರ್ ಜಯಂತಿ ಬೇಕು

ಅಂಬೇಡ್ಕರ್ ಹೆಸರನಲ್ಲಿ ಡಿಜೆ ಸಾಂಗ್ ಬೇಕು

ಆದರೆ ಅಂಬೇಡ್ಕರ್ ಹೋರಾಟದ ಹಾದಿ

ಮಾತ್ರ ಬೇಡವಾಯಿತು

## ೭. ವಿಶ್ವಕ್ಕೆ ಗೊತ್ತಾಯ್ತು

ಅನ್ಯ ರಾಷ್ಟ್ರದಿಂದ ಭಾರತಕ್ಕೆ ಬಂದು

ನಮ್ಮ ರಾಷ್ಟ್ರದ ನೆಲವನ್ನು ನಮಸ್ಕರಿಸಿ

ಬರುವಂತೆ ಮಾಡಿದ ದೇವಧೂತ ನೀನಾದೆ

ನಿನ್ನನೇ ಮರೆತು ನನ್ನ ದೇಶ

ನೀನು ಯಾರೆಂಬದು ಗೊತ್ತಿಲ್ಲದಂತೆ ನಟಿಸುತ್ತಿದೆ

ಓ ನನ್ನ ಗೌತಮ ಬುದ್ದನೇ

ವಿಶ್ವದಲ್ಲಿ ಮಾನವೀಯತೆ ನೆಲೆಸಲು ಕಾರಣವಾದೇ

ನಮ್ಮ ರಾಷ್ಟ್ರವನ್ನು ಅನೇಕ ವೇಳೆ ನೆನೆಸುವಂತೆ

ಮಾಡಿದ ಕನ್ನಡ ನಾಡಿನ ಗುರುವಾದೆ

ನಿನ್ನನೇ ಅನುಸರಿಸದ ನನ್ನ ದೇಶ

ಜಾತಿಯಿಂದ ಬೆಂಕಿ ಹಚ್ಚುತ್ತಿರುವ ನಾಡಾಗಿದೆ

ಓ ನನ್ನ ಅಣ್ಣಾ ಬಸವಣ್ಣ

ಅನ್ಯಾಯದ ವಿರುದ್ಧ ಸಿಡಿದೆದ್ದೇಳುವ ಶಕ್ತಿಯಾದೆ

ಪ್ರಪಂಚದ ವಿದ್ಯಾವಂತರ ಎದೆಯಲ್ಲಿ ನೆಲೆಸಿದೆ

ನಮಗೆಲ್ಲ ಮರೆಯದ ಮಾಣಿಕ್ಯ ನೀನಾದೆ

ನಿನ್ನ ಮಾರ್ಗದಲ್ಲಿ ನಡೆಯದ ದೇಶ ನನ್ನದಾಯ್ತು

ಅನ್ಯಾಯಕ್ಕೆ ಒಳಗಾದವರಿಗೆ ಇನ್ನಷ್ಟು ಅನ್ಯಾಯ ಮಾಡುತ್ತಿದೆ

ಓ....ನನ್ನ ಸ್ಫೂರ್ತಿ ಅಂಬೇಡ್ಕರ

## ೮. ಜೈ ಭೀಮ್....!

ಜೈಭೀಮ್...! ಜೈಭೀಮ್...! ಜೈಭೀಮ್...!

ಇದೆ ನಮ್ಮ ಒಗ್ಗಟಿನ ಸೂತ್ರ...!

ತುಳಿತದಲ್ಲಿರುವರಿಗೆ ನ್ಯಾಯ ಕೊಡಿಸುವ ಮಂತ್ರ..!

ಅನ್ಯಾಯದ ವಿರುದ್ಧ ನಿಲ್ಲುವ ತಂತ್ರ...!

ನೊಂದವರಿಗೆ ಸಾಂತ್ವನ ಹೇಳಲು ದಾರಿದೀಪ

ಬಿದ್ದವರಿಗೆ ಬೆಳಕು ತೋರಿಸುವ ಕರುಣಾದೀಪ

ಜಾತಿ ಸುಳಿಯಲ್ಲಿ ಇರುವವರಿಗೆ ಎಂದೆಂದಿಗೂ

ಭೀಮಬಾಣ ನಮ್ಮ ಜೈ ಭೀಮ್ ಘೋಷಣೆ...!

ಶಿಕ್ಷಣ ಪಡೆಯುವರ  ಜೊತೆ....!

ಸಾಧನೆ ಮಾಡುವರ ಸ್ಫೂರ್ತಿ...!

ಅನ್ಯಾಯದ ವಿರುದ್ದ ಬದುಕವರ ಶಕ್ತಿ...!

ನಮ್ಮ ಈ ಜೈ ಭೀಮ್ ಕೂಗು....!

## ೬. ಬುದ್ಧನ ತತ್ವಗಳು

ಸತ್ಯವನ್ನು ಹೇಳು ಅಂದೇ,

ಸುಳ್ಳನ್ನೇ ಬಂಡವಾಳವಾಗಿ

ಮಾಡಿಕೊಂಡರು

ನಮ್ಮ ರಾಜಕೀಯ ರಾಕ್ಷಸರು.

ಹಿಂಸೆಯನ್ನು ಬಿಟ್ಟು

ಅಹಿಂಸೆಯ ದಾರಿಯಲ್ಲಿ

ಬದುಕಿ ಅಂತ ಹೇಳಿದೆ,

ಕೋಮುವಾದದ ಹೆಸರಲ್ಲಿ

ಜೀವಂತವಾಗಿರುವ ಜೀವವನ್ನೇ

ಬಲಿ ತೆಗೆದುಕೊಳ್ಳುತ್ತಿದ್ದಾರೆ

ನಮ್ಮ ರಾಜಕೀಯ ಜರಾಸಂಧರು.

ಕಳ್ಳತನವನ್ನು ಮಾಡಬಾರದು

ಮಹಾ ಅಪರಾಧವೆಂದೆ,

ಇವರು ಸಣ್ಣಪುಟ್ಟ ಭ್ರಷ್ಟಚಾರ ಮಾಡಿ

ದೊಡ್ಡ ಕಳ್ಳರಾಗಿದ್ದಾರೆ

ನಮ್ಮ ರಾಜಕೀಯ ಕೀಚಕರು.

ಪಾವಿತ್ರ್ಯತೆ ನಿನ್ನ ತತ್ವವಾಗಿತ್ತು.

ರಾಜಕೀಯ ಅನ್ನೋ ಹೆಸರಲ್ಲಿ

ರಾಜಕಾರಣ ಮಾಡಿ

ರಾಜ್ಯವನ್ನೇ ಅಪವಿತ್ರಗೊಳಿಸಿದ್ದಾರೆ

ನಮ್ಮ ರಾಜಕೀಯ ಯಮಗಳು.

## ೧೦. ವಿಶ್ವಜ್ಯೋತಿಯನ್ನು ಮರೆತವರು

ಬಸವಣ್ಣ ಅನುಭವ ಮಂಟಪ ಕಟ್ಟಿದರು,

ಮಠಾಧೀಶರು ರಾಜಕೀಯ ಮಂಟಪ ಕಟ್ಟುತ್ತಿರುವರು.

ಬಸವಣ್ಣನ ವಚನಗಳನ್ನು ಹೇಳಿದರು,

ಆ ವಚನಗಳ ಹಾದಿಯನ್ನೇ ಮರೆತರು.

ಬಸವಣ್ಣನ ಧರ್ಮವನ್ನು ಸಾರಿದರು,

ಆ ಧರ್ಮದ ನೀತಿಯನ್ನು ಮರೆತರು.

ವಿಶ್ವಗುರು ನಡೆದು ಬಂದ ಜೀವನವನ್ನು ಹೇಳುತ್ತಾ,

ಆ ರೀತಿ ಬದುಕುವುದನ್ನೇ ಬಿಟ್ಟಿರುವರು.

ವಿಶ್ವಗುರು ಜಾತಿ ಮರೆತು ಬಸವ ಧರ್ಮ ಸ್ಥಾಪಿಸಿದರು,

ಮಠಾಧೀಶರು ಬಸವಧರ್ಮವನ್ನೇ ಜಾತಿಯನ್ನಾಗಿಸಿದರು.

ಬಸವಣ್ಣ ಸಮಾನತೆಯನ್ನು ಹುಡುಕಿದರು,

ಸ್ವಾಮಿಗಳು ಅಸಮಾನತೆಯನ್ನು ಮಾಡುತ್ತಿರುವರು.

ಬಸವ ಧರ್ಮದ ಸ್ಥಾಪಕ ಬಸವಣ್ಣ ಅನ್ನುತ್ತಾ

ಲಿಂಗಾಯತರನ್ನೆಲ್ಲ ಒಟ್ಟುಗೂಡಿಸಿದರು,

ಲಿಂಗಾಯತರ ಹೆಸರಲ್ಲಿ ರಾಜಕೀಯ ಮಾಡಿದರು.

ಜಗತ್ ಜ್ಯೋತಿಯ ಹೆಸರು ಹೇಳಿದರು,

ಜಗತ್ ಜ್ಯೋತಿಯ ಹೆಸರಲ್ಲಿ ಹೊಟ್ಟೆ ತುಂಬಾ

ಊಟ ಮಾಡಿದರು ನಮ್ಮ ಮಠಾಧೀಶರು.

## ೧೧. ನಿಮ್ಮ ಹುಟ್ಟು

ಬುದ್ಧ ಹುಟ್ಟಿದ್ದಕ್ಕೆ

ಈ ಜಗತ್ತು ಸತ್ಯ

ಅನ್ನುವ ತತ್ವವನ್ನು ಪಾಲಿಸಿತು.

ಬಸವಣ್ಣ ಹುಟ್ಟಿದಕ್ಕೆ

ಈ ಜಗತ್ತು ಜಾತಿ

ಅನ್ನೋದನ್ನು ಬಿಟ್ಟು ಬದುಕಿತು.

ಅಂಬೇಡ್ಕರ್ ಹುಟ್ಟಿದಕ್ಕೆ

ಈ ಜಗತ್ತು ಓದು

ಅನ್ನೋದನ್ನು ಮರೆಯದೇ ಕಲಿಯಿತು.

## ೧೨. ಉಲ್ಟಾಪಲ್ಟಾ

ಬುದ್ಧ ಅಹಿಂಸೆಯ ಮಾರ್ಗದಲ್ಲಿ ಬದುಕಿದವರು,

ಬುದ್ಧನ ಅನುಯಾಯಿಗಳು ಹಿಂಸೆಯ ದಾರಿಯಲ್ಲಿ ಬದುಕುತ್ತಿರುವರು.

ಬಸವಣ್ಣ ಜಾತಿಯನ್ನು ಖಂಡಿಸಿ,ಅಂತರ್ಜಾತಿ ವಿವಾಹವನ್ನು ಮಾಡಿದವರು.

ಬಸವಣ್ಣನ ಅನುಯಾಯಿಗಳು ಜಾತಿಯನ್ನು ಹುಟ್ಟುಹಾಕಿ,

ಅಂತರ್ಜಾತಿ ವಿವಾಹವನ್ನು ನಿಲ್ಲಿಸುತ್ತಿರುವರು.

ಅಂಬೇಡ್ಕರ್ ಸಮಾನತೆಗಾಗಿ ತಮ್ಮ ಜೀವವನ್ನು ಮುಡುಪಾಗಿಟ್ಟವರು,

ಅಂಬೇಡ್ಕರ್ ಅನುಯಾಯಿಗಳು ರಾಜಕೀಯ ಎಂಬ ಸೂತ್ರದಲ್ಲಿ ಅಸಮಾನತೆ

ಹುಟ್ಟುಹಾಕುತ್ತಿರುವರು.

# ೧೩. ಬದಲಾವಣೆ

ಬುದ್ಧ ನಾಲ್ಕು ನೋವಿನ ದೃಶ್ಯಗಳನ್ನು ನೋಡಿ ಪರಿವರ್ತನೆಯಾಗಿ

ಇಡೀ ವಿಶ್ವಕ್ಕೆ ಶಾಂತಿಯ ಒಡೆಯರಾದರು.

ಬಸವಣ್ಣ ನಾಲ್ಕು ಜಾತಿ ವಿರೋಧಿ ಕಾರ್ಯಕ್ರಮಗಳನ್ನು ಮಾಡಿ

ಇಡೀ ವಿಶ್ವಕ್ಕೆ ವಿಶ್ವಗುರು ಆದವರು.

ಅಂಬೇಡ್ಕರ್ ನಾಲ್ಕು ಜಾತಿಯ ಪೆಟ್ಟುಗಳನ್ನು ತಿಂದು

ಇಡೀ ವಿಶ್ವಕ್ಕೆ ಮಾದರಿಯಾದವರು.

## ೧೪. ಮಾನವ ಧರ್ಮ ಸ್ಥಾಪನೆ

ಭಾರತದಲ್ಲಿ ಜಾತಿ ವ್ಯವಸ್ಥೆ ಇದ್ದ ಕಾರಣ,

ಬುದ್ಧ ಬೌದ್ಧ ಧಮ್ಮವನ್ನು ಸ್ಥಾಪಿಸಿದರು.

ಭಾರತದಲ್ಲಿ ಜಾತಿಯ ವಿಷ ಇದ್ದ ಕಾರಣ,

ಬಸವಣ್ಣ ಲಿಂಗಾಯತ ಧರ್ಮವನ್ನು ಸ್ಥಾಪಿಸಿದರು.

ಅಂಬೇಡ್ಕರ್ ಜಾತಿಯಿಂದ ನೋವುಂಡ ಕಾರಣ,

ಸಂವಿಧಾನ ಅನ್ನುವ ದೊಡ್ಡ ಗ್ರಂಥವನ್ನೇ ಬರೆದರು.

## ೧೫. ಮೂಲ ಭಾಷೆಯ ಶಕ್ತಿ

ಬುದ್ಧ ತನ್ನ ತತ್ವಗಳನ್ನು ಸ್ಥಳೀಯ ಭಾಷೆಯಲ್ಲಿ ಭೋಧಿಸಿದ,

ಬೌದ್ಧ ಧಮ್ಮ ಇಡೀ ವಿಶ್ವಕ್ಕೆ ಪಸರಿಸಿತು.

ತನ್ನ ಅನುಯಾಯಿಗಳನ್ನು ಹುಟ್ಟು ಹಾಕಿಕೊಂಡಿತು.

ಬಸವಣ್ಣ ತನ್ನ ಮೂಲ ಭಾಷೆಯಲ್ಲಿ ವಚನ ಬರೆದ,

ಇಡೀ ಪ್ರಪಂಚವೇ ವಚನಗಳನ್ನು ಓದುವಂತಾಯಿತು.

ಬಸವಣ್ಣನನ್ನು ತಮ್ಮ ಗುರುವನ್ನಾಗಿ ಮಾಡಿಕೊಂಡಿತು.

ಅಂಬೇಡ್ಕರ್ ತಮ್ಮ ಬೆಳವಣಿಗೆ ಭಾಷೆಯಲ್ಲಿಯೇ ಅಧ್ಯಯನ ಮಾಡಿದರು.

ಅಂಬೇಡ್ಕರ್ ಜ್ಞಾನ ಇಡೀ ವಿಶ್ವಕ್ಕೆ ಗೊತ್ತಾಯ್ತು

ಅಂಬೇಡ್ಕರ್ ರವರನ್ನು ಅನುಸರಿಸುವರು ಹೆಜ್ಜೆ,ಹೆಜ್ಜೆಗೆ ಹುಟ್ಟಿಕೊಂಡರು.

## ೧೮. ಅನುಸರಿಸಿದವರು

ಬುದ್ಧನನ್ನು ಅನುಸರಿಸಿದವರು

ವಿಶ್ವಕ್ಕೆ ಶಾಂತಿ ಪ್ರಿಯರಾಗಿ ಪರಿಚಯವಾದರು.

ಬಸವಣ್ಣನನ್ನು ಅನುಸರಿಸಿದವರು

ವಿಶ್ವಕ್ಕೆ ಮನುಷ್ಯರಾಗಿ ಪರಿಚಯವಾದರು.

ಅಂಬೇಡ್ಕರ್ ರವರನ್ನು ಅನುಸರಿಸಿದವರು

ವಿಶ್ವಕ್ಕೆ ಜ್ಞಾನಿಯಾಗಿ ಪರಿಚಯವಾದರು.

ಈ ಮೂರು ರತ್ನಗಳನ್ನು ಅನುಸರಿಸಿದವರು

ಇಡೀ ವಿಶ್ವಕ್ಕೆ ನೊಂದವರಿಗೆ ನ್ಯಾಯ ಕೊಡಿಸುವ

ದೇವರಾಗಿ ಪರಿಚಯವಾದರು.

## ೧೭. ರೂಪಾಯಿ ಕೆಲಸಗಾರರು

ಬುದ್ಧ ಭಾರತವನ್ನು ಇಡೀ ವಿಶ್ವಕ್ಕೆ

ಶಾಂತಿ ದೇಶವೆಂದು ತೋರಿಸಿಕೊಟ್ಟ,

ಬುದ್ಧನನ್ನು ಈ ದೇಶದಲ್ಲಿರುವ

ಕೆಲವು ನಕಲಿ ಧರ್ಮ ಭಕ್ತರು

ಬುದ್ಧನಿಂದ ಹಿಂದೂ ಧರ್ಮ ಹಾಳಾಯ್ತು

ಎನ್ನುವ ವಿಷಯವನ್ನು ಬಿತ್ತಿದರು.

ಬಸವಣ್ಣ ಇಡೀ ಪ್ರಪಂಚಕ್ಕೆ ಭಾರತವನ್ನು

ವಚನಗಳ ಮೂಲಕ ಗುರುವನ್ನಾಗಿ ಮಾಡಿದರು.

ಆದರೆ, ಈ ದೇಶದಲ್ಲಿನ ಬಸವಣ್ಣನ ನಕಲಿ ಅನುಯಾಯಿಗಳು

ಬಸವಣ್ಣನ ಜಾತಿಯನ್ನು ಮಾತ್ರ ತಮ್ಮದಾಗಿಸಿಕೊಂಡರು

ಬಸವಣ್ಣನ ವಚನಗಳನಲ್ಲ,ಬಸವಣ್ಣನ ದಾರಿಯನಲ್ಲ.

ಅಂಬೇಡ್ಕರ್ ಇಡೀ ವಿಶ್ವಕ್ಕೆ ಭಾರತದ

ಜ್ಞಾನವನ್ನು ತೋರಿಸಿಕೊಟ್ಟರು.

ಇನ್ನೂ ಈ ದೇಶದ ಕೆಲವರು

ಅಂಬೇಡ್ಕರ್ ಧರ್ಮ ವಿರೋಧಿ ಅನ್ನುವ

ವಿಚಾರವನ್ನು ಬಿತ್ತಿದರು ಹೊರತು,

ಅವರ ಜ್ಞಾನ ಇಡೀ ಪ್ರಪಂಚಕ್ಕೆ ದೊಡ್ಡದೇಂದು ಹೇಳಲಿಲ್ಲ.

## ೧೮. ವಿಶ್ವಜ್ಯೋತಿಗಳು

ಭಾರತದಲ್ಲಿ ಬುದ್ಧನ ಜನನವಾಯಿತು,

ಭಾರತ ಇಡೀ ವಿಶ್ವಕ್ಕೆ ಶಾಂತಿದೂತವಾಯಿತು.

ಭಾರತದಲ್ಲಿ ಬಸವಣ್ಣನ ಜನನವಾಯಿತು,

ಭಾರತ ಇಡೀ ವಿಶ್ವಕ್ಕೆ ಗುರುವಾಯಿತು.

ಭಾರತದಲ್ಲಿ ಅಂಬೇಡ್ಕರ್ ಜನನವಾಯಿತು,

ಭಾರತ ಇಡೀ ವಿಶ್ವಕ್ಕೆ ಜ್ಞಾನಿಯಾಯಿತು.

## ೧೯. ಸತ್ಯವಾದ ಮಾತು

ನನ್ನ ದೇಶದ ಜನರಿಗೆ

ಬುದ್ಧನ ತತ್ವಗಳು

ಗೊತ್ತಾಗಲಿಲ್ಲ.

ಅದಕ್ಕೆ, ಒಳ್ಳೆಯ ರೀತಿಯಲ್ಲಿ

ಬದುಕುವುದನ್ನೇ ಬಿಟ್ಟರು.

ನನ್ನ ದೇಶದ ಜನರು

ಬಸವಣ್ಣನ ವಚನಗಳನ್ನು

ಕೇಳಿಸಿಕೊಳ್ಳಲಿಲ್ಲ.

ಆಗಾಗಿ, ಮಾನವೀಯತೆ

ಅನ್ನೋದನ್ನೇ ಮರೆತುಬಿಟ್ಟರು.

ನನ್ನ ದೇಶದ ಜನರು

ಅಂಬೇಡ್ಕರ್ ರವರನ್ನು

ಓದಲಿಲ್ಲ.

ಹೀಗಾಗಿ, ಸಮಾನತೆ

ಇರುವುದನ್ನೇ ಕಾಣಲಿಲ್ಲ.

## ೧೦. ನನ್ನ ಭಾರತ

ಸಮಾನತೆ ಬೋಧಿಸಿದ

ಗೌತಮ ಬುದ್ಧನನ್ನು

ಬೌದ್ಧ ಧಮ್ಮಕ್ಕೆ

ಮಾತ್ರ ಸೀಮಿತನಾಗಿ

ಮಾಡಿತು ನನ್ನ ಭಾರತ.

ಸಮಾನತೆಯನ್ನು ತೋರಿಸಿಕೊಟ್ಟ

ವಚನಕಾರ ಬಸವಣ್ಣನನ್ನು

ಲಿಂಗಾಯತ ಧರ್ಮದ

ವಚನಕಾರನನ್ನಾಗಿ ಮಾಡುವ

ರೀತಿಯಲ್ಲಿ ಬದುಕುತ್ತಿದ್ದೆ ನನ್ನ ಭಾರತ.

ಸಮಾನತೆಗಾಗಿ ಬದುಕಿದ

ಲೆಜೆಂಡ್ ಅಂಬೇಡ್ಕರ್ ರವರನ್ನು

ದಲಿತರಿಗೆ ಮಾತ್ರ ನಾಯಕರಾಗಿದ್ದಾರೆ

ಎನ್ನುವ ರೀತಿಯಲ್ಲಿ

ಸಾರುತ್ತಿದ್ದೆ ನನ್ನ ಭಾರತ.

## ೨೧. ನೀನು ಸ್ವಾರ್ಥಿಯಾಗಿರುವೆ

ಬೌದ್ಧ ಧಮ್ಮ ಅನುಸರಿಸಲು

ಶುರುಮಾಡಿರುವೆ,

ನಿನ್ನ ಧಮ್ಮ ಬೌದ್ಧವೆಂದು

ಸಾರುತ್ತಿರುವೆ.

ಲಿಂಗಾಯತ ಧರ್ಮ

ಅನುಸರಿಸಲು ಶುರುಮಾಡಿದೆ,

ನಿನ್ನ ಧರ್ಮ ಲಿಂಗಾಯತವೆಂದು

ಹೇಳುತ್ತಿರುವೆ.

ಅಂಬೇಡ್ಕರ್ ರವರನ್ನು

ಅನುಸರಿಸಲು ಶುರುಮಾಡಿದೆ,

ನಿನ್ನ ಜಾತಿ ದಲಿತನೆಂದು

ತೋರಿಸಿಕೊಳ್ಳುತ್ತಿರುವೆ.

ಬುದ್ಧ,ಬಸವ ಅಂಬೇಡ್ಕರ್

ಬದುಕಿದ್ದು ಸಮಾನತೆಗಾಗಿ

ಜಾತಿ,ಧರ್ಮದ ಹೆಸರಲ್ಲಿ ಅಲ್ಲ.

## ೧೧. ಗುರಿಯ ಗುರುಗಳು

ಬುದ್ಧ ಅಷ್ಟಾಂಗ ಮಾರ್ಗಗಳನ್ನು ಬೋಧಿಸಿದ್ದು

ನಮ್ಮ ಸಾಧನೆಗೆ ದಾರಿಯಾದವು.

ಬಸವಣ್ಣ ಹೇಳಿದ ವಚನಗಳು

ನಾವು ಬದುಕಲು ಅನುಕೂಲವಾದವು.

ಅಂಬೇಡ್ಕರ್ ಬರೆದ ಪುಸ್ತಕಗಳು

ನಾವು ಜ್ಞಾನಿಯಾಗಲು ಸ್ಫೂರ್ತಿಯಾದವು.

## ೨೩. ನಿನ್ನ ನೀತಿ

ಬೌದ್ಧ ಧಮ್ಮವನ್ನು

ಅನುಸರಿಸುತ್ತಿರುವೆ

ಆದರೆ, ನೀನು

ಬುದ್ಧನ ತತ್ವಗಳನ್ನು

ಒಪ್ಪಿಕೊಳ್ಳಲು ಸಿದ್ಧನಿಲ್ಲ.

ಲಿಂಗಾಯತ ಧರ್ಮ

ನಿನ್ನ ಧರ್ಮ

ಆದರೆ, ನಿನಗೆ

ಬಸವಣ್ಣನ ಹಾದಿಯಲ್ಲಿ

ಬದುಕಲು ಇಷ್ಟವಿಲ್ಲ.

ಅಂಬೇಡ್ಕರ್ ರವರನ್ನು

ಓದಲು ಇಚ್ಚೆಸಿರುವೆ

ಆದರೆ, ನೀನು

ಅಂಬೇಡ್ಕರ್ ರವರ ತರ ತ್ಯಾಗಿ

ಆಗಲು ಇಚ್ಚೆಸುತ್ತಿಲ್ಲ.

## ೧೪. ಇದು ಸರಿಯೇ ?

ಬುದ್ಧ ತನ್ನ ತತ್ವಗಳಿಂದ

ವಿಶ್ವದ ಮೂಲೆ,ಮೂಲೆಯಲ್ಲಿ ನೆಲೆಸಿದ.

ಆದರೆ, ತನ್ನ ಮೂಲ ದೇಶದಲ್ಲಿಯೇ

ಜಾಗ ಸಿಗದಂತಾಯ್ತು.

ಬಸವಣ್ಣ ತನ್ನ ವಚನಗಳಿಂದ

ಜಗತ್ತಿನ ಕಟ್ಟ ಕಡೆಯ ವ್ಯಕ್ತಿಗೆ ತಲುಪಿದ.

ಆದರೆ, ತನ್ನ ಹುಟ್ಟು ನಾಡಲ್ಲಿಯೇ

ಎಲ್ಲರ ಕಣ್ಮರೆಯಾಗಿರುವನು.

ಅಂಬೇಡ್ಕರ್ ತನ್ನ ಜ್ಞಾನದಿಂದ

ಭೂಮಂಡಲದ ಕೊನೆಯ ಕಾಲೇಜುಗೂ ತಲುಪಿದರು.

ಆದರೆ, ತನ್ನ ಜ್ಞಾನವನ್ನು ಉಪಯೋಗಿಸಿಕೊಂಡ ದೇಶದಲ್ಲಿಯೇ

ಅಂಬೇಡ್ಕರ್ ರವರ ಜ್ಞಾನಕ್ಕೆ ಬೆಲೆ ಸಿಗದಂತಾಯ್ತು.

## ೨೫. ವ್ಯಕ್ತಿಗಿಂತ ಸಿದ್ಧಾಂತ ಮುಖ್ಯ

ನಾನು ಬುದ್ಧನ ಅನುಯಾಯಿ

ಬೌದ್ಧ ಧಮ್ಮದವನಲ್ಲ.

ಏಕೆಂದರೆ, ಬುದ್ಧ ಧಮ್ಮಕ್ಕಿಂತ

ಉತ್ತಮ ತತ್ವಗಳನ್ನು

ಹೆಚ್ಚಿಗೆ ಬೋಧಿಸಿದ.

ನಾನು ಬಸವಣ್ಣನ ಅನುಯಾಯಿ

ಲಿಂಗಾಯತ ಧರ್ಮದವನಲ್ಲ.

ಏಕೆಂದರೆ, ಬಸವಣ್ಣ ಧರ್ಮಕ್ಕಿಂತ

ಮಾನವೀಯತೆಯಿಂದ ಬದುಕುವುದನ್ನು

ಹೆಚ್ಚಿಗೆ ತನ್ನ ವಚನಗಳಲ್ಲಿ ಹೇಳಿದ.

ನಾನು ಅಂಬೇಡ್ಕರ್ ಅನುಯಾಯಿ

ಆದರೆ ನಾನು ದಲಿತ ಹೋರಾಟಗಾರನಲ್ಲ.

ಏಕೆಂದರೆ, ಅಂಬೇಡ್ಕರ್ ರವರು ದಲಿತರಿಗಿಂತ

ಈ ಸಮಾಜದಲ್ಲಿ ಅನ್ಯಾಯಕ್ಕೆ ಒಳಗಾದ

ಪ್ರತಿಯೊಬ್ಬರ ನ್ಯಾಯಕ್ಕಾಗಿ ಹೋರಾಡಿದವರು.

## ೧೪. ಒಪ್ಪಿಕೊಳ್ಳುವೆ

ನಾನು ಸಾಮಾಜಿಕ ಸಮಾನತೆ

ಸಿಗದೇ ಬದುಕುತ್ತಿರುವೆ

ಅದಕ್ಕೆ ನಾನು ಯಾವುದೇ ಧರ್ಮವನ್ನು

ಅನುಸರಿಸುವುದಿಲ್ಲ

ಬದಲಿಗೆ ಬುದ್ಧನ ತತ್ವಗಳನ್ನು ಅನುಸರಿಸುವೆ

ನಾನು ಜಾತಿ ಎಂಬ ಸುಳಿಯಲ್ಲಿ

ಸಿಕ್ಕು ಒದ್ದಾಡುತ್ತಿರುವೆ

ಅದಕ್ಕೆ ನಾನು ಯಾವುದೇ ಧರ್ಮದ

ವಿಚಾರಗಳನ್ನು ಸಾರುವುದಿಲ್ಲ

ಬದಲಿಗೆ ಬಸವಣ್ಣನ ಜೀವನವನ್ನು ಸಾರುತ್ತೇನೆ

ನಾನು ಅನ್ಯಾಯಕ್ಕೆ ಒಳಪಟ್ಟು

ದುಃಖದಲ್ಲಿ ಸಾಗುತ್ತಿರುವೆ

ಹೀಗಾಗಿ ನಾನು ನೂರು ಜನರನ್ನು

ಅನುಸರಿಸುವುದಕ್ಕಿಂತ

ಅಂಬೇಡ್ಕರ್ ರವರಂತ

ಒಬ್ಬರನ್ನು ಅನುಸರಿಸುವೆ

## ೨೭. ವಿಚಾರಗಳನ್ನು ತಿರಸ್ಕರಿಸಿತು

ನಿನ್ನ ತತ್ವಗಳು ಇಡೀ ಭೂಮಂಡಲಕ್ಕೆ

ನನ್ನ ಭಾರತವನ್ನು ಪರಿಚಯಿಸಿ ಕೊಟ್ಟಿತು

ಆದರೆ ನಿನ್ನ ತತ್ವಗಳೇ ಬೇಡವಾಯಿತು

ನನ್ನ ದೇಶಕ್ಕೆ ಓ....ಗೌತಮ

ನಿನ್ನ ವಚನಗಳಿಂದ ಇಡೀ ವಿಶ್ವಕ್ಕೆ

ಕನ್ನಡ ನಾಡಿನ ಶಕ್ತಿ ಗೊತ್ತಾಯ್ತು

ಆದರೆ ನಿನ್ನ ವಚನಗಳನ್ನೇ ಮರೆತಿದೆ

ನನ್ನ ದೇಶ ಓ... ಅಣ್ಣಾ

ನಿನ್ನ ಜ್ಞಾನದಿಂದ ಇಡೀ ಪ್ರಪಂಚವೇ

ಭಾರತದ ಕಡೆ ತಿರುಗಿ ನೋಡುತ್ತಿದೆ

ಆದರೆ ನಿನ್ನ ಕಡೆ ತಿರುಗಿ ನೋಡುತ್ತಿಲ್ಲ

ನನ್ನ ದೇಶ  ಓ..... ನನ್ನ ಭೀಮ

## ೨೮. ನಾ ಮರೆತಿಲ್ಲ

ನಿನ್ನನ್ನು ನಾ ನೋಡಿಲ್ಲ

ನೀನು ಬೋಧಿಸಿದ

ತತ್ವಗಳನ್ನು ನಾ ಮರೆತಿಲ್ಲ.

ನಿನ್ನನ್ನು ನಾ ಕಂಡಿಲ್ಲ

ನೀನು ಬದುಕಿದ

ಹಾದಿಯನ್ನು ನಾ ಮರೆತಿಲ್ಲ.

ನಿನ್ನ ಜೊತೆ ಮಾತನಾಡಿಲ್ಲ

ನೀನು ಅನ್ಯಾಯಕ್ಕೆ ಒಳಗಾದವರ

ಪರ ಧ್ವನಿ ಎತ್ತಿದ್ದು ನಾ ಮರೆತಿಲ್ಲ.

## ೧೯. ಕೋಮು ಬೀಜ ಬಿತ್ತಿದರು

ನಿನ್ನ ಬಗ್ಗೆ ಕೇಳಿದಾಗ

ಬೌದ್ಧ ಧಮ್ಮದವನೆಂದು

ಹೇಳಿಕೊಟ್ಟರು ಹೊರತು,

ನೀನು ಒಬ್ಬ ಅಹಿಂಸಾ

ತತ್ವವಾದಿಯೆಂದು

ಯಾರು ಹೇಳಿಕೊಡಲಿಲ್ಲ.

ಸ್ವಾಮಿಗಳು ಭಾಷಣದಲ್ಲಿ

ನೀನು ಲಿಂಗಾಯತ ಧರ್ಮದವನೆಂದು

ಮಾತನಾಡಿದರು ವಿನಾ:

ನೀನು ಜಾತಿ ನಿರ್ಮೂಲನೆಯ

ಒಡೆಯನೆಂದು

ಯಾರು ಹೇಳಲಿಲ್ಲ.

ನನ್ನವರು ಅನಿಸಿಕೊಂಡವರು

ನಿನ್ನನ್ನು ನಮ್ಮ ಜಾತಿಯವನೆಂದು

ಪದೇ,ಪದೇ ಹೇಳಿದರು ವಿನಾ:

ನೀನು ತುಳಿತಕ್ಕೆ ಒಳಗಾದ

ಪ್ರತಿಯೊಬ್ಬರ ಸಲುವಾಗಿ

ಬದುಕಿದ ಸಿಂಹನೆಂದು

ನನ್ನವರು ಯಾರು ಹೇಳಲಿಲ್ಲ.

## ೩೦. ಎಷ್ಟರ ಮಟ್ಟಿಗೆ ಸರಿ ?

ತಥಾಗತನೆ ನೀನು

ಜಾತಿಗೆ ಸೇರಿದವನೇ ಅಥವಾ

ಧಮ್ಮಕ್ಕೆ ಸೇರಿದವನೇ

ನೀನು ಬೋಧಿಸಿದ ತತ್ವಗಳು

ಜಾತಿಯನ್ನು ಕೇಳುತ್ತಿಲ್ಲ

ಧಮ್ಮವನ್ನು ಕೇಳುತ್ತಿಲ್ಲ

ಆದರೆ ನಿನ್ನ ಅನುಯಾಯಿಗಳು

ಏಕೆ ಜಾತಿ,ಧಮ್ಮವನ್ನು

ಮಾಡಿಕೊಂಡಿದ್ದಾರೆ ?

ಅಣ್ಣಾ ನೀನು

ನಡೆದು ಬಂದ ಹಾದಿ

ಜಾತಿಯನ್ನು ಕೇಳಲಿಲ್ಲ

ಜಾತಿಯನ್ನು ಮಾಡಲಿಲ್ಲ

ದೃಷ್ಟಿ ಒಂದೇಯಾಗಿತ್ತು

ಮಾನವಧರ್ಮ ! ಆದರೆ

ನಿನ್ನ ದಾರಿಯಲ್ಲಿ ನಡೆಯುತ್ತೇನೆ

ಅನ್ನುವರು ಜಾತಿಯನ್ನು ಕೇಳುತ್ತಿದ್ದಾರೆ

ಜಾತಿಯಿಂದ ದೂರ ತಳ್ಳುತ್ತಿದ್ದಾರೆ

ಯಾರ ಹತ್ತಿರ ಹೇಳಿಕೊಳ್ಳಲಿ

ನನ್ನ ದುಃಖವನ್ನು ?

ಓ... ಧೀರನೇ

ನಿನ್ನ ಹೋರಾಟದ ಮಾರ್ಗ

ತುಳಿತಕ್ಕೆ ಒಳಗಾದವರಿಗೆ

ಅನ್ಯಾಯಕ್ಕೆ ಒಳಪಟ್ಟವರಿಗೆ

ನ್ಯಾಯ ದೊರಕಿಸಿ ಕೊಡುವುದೇ

ಆಗಿತ್ತು, ಹೊರತು

ಯಾವುದೇ ಒಂದು ಸಮುದಾಯದ

ಸಲುವಾಗಿ ಅಲ್ಲ.

ಆದರೆ ಇಂದು ನಿನ್ನನ್ನು ಜಾತಿಯಿಂದ ಕಂಡು

ನಿನಗೆ ಅಗೌರವದಿಂದ ನಡೆದುಕೊಳ್ಳುತ್ತಿದ್ದಾರೆ

ನಿನಗೆ ನ್ಯಾಯ ಸಿಗದಂತಾಗಿದೆ

ನಿನಗೆ ನ್ಯಾಯ ಕೊಡಿಸುವರಾರು ಭೀಮ ?

ನ್ಯಾಯ ಕೇಳಿದರೆ,

ನಮಗೆ ದೇಶದ್ರೋಹಿ ಪಟ್ಟ ಕಟ್ಟುತ್ತಿದ್ದಾರೆ.

## ೩೧. ಅಂಬೇಡ್ಕರ್ ಸೂತ್ರಗಳು

ನೀನು ತುಳಿಯವರನ್ನು ಎದುರಿಸಲು

ಇರುವ ಅಸ್ತ್ರವೆಂದರೆ ಜ್ಞಾನವೆಂದು ಅರಿತೇ,

ಗೊತ್ತಿದ್ದೂ ಶಿಕ್ಷಣದಿಂದ ಏನು ಪ್ರಯೋಜನವಿಲ್ಲ

ಅನ್ನುವ ರೀತಿಯಲ್ಲಿ ಇನ್ನೂ ಮೂಢರಾಗಿದ್ದಾರೆ

ನನ್ನ ಜನ.

ನನ್ನ ಜನರಿಗೆ ಸಂಘಟನೆ ಕಟ್ಟಿದರೆ

ಒಗ್ಗಟಾಗಬಹುದು ಅಂತ ಸಲಹೆ ಕೊಟ್ಟೆ

ಆದರೆ, ಇಂದು ಹೆಜ್ಜೆ,ಹೆಜ್ಜೆಗೆ ಸಂಘಟನೆ ಕಟ್ಟಿ

ತಮ್ಮ ಒಗ್ಗಟ್ಟನ್ನು ಮುರಿದುಕೊಳ್ಳುತ್ತಿರುವರು

ನನ್ನ ಜನ.

ಅನ್ಯಾಯಕ್ಕೆ ಒಳಗಾದವರು ಸಂಘಟನೆಯ ಮೂಲಕ

ಹೋರಾಟ ಮಾಡಿ ತಮ್ಮ ಬೇಕು,ಬೇಡಿಕೆಗಳನ್ನು

ಪಡೆದುಕೊಳ್ಳಬೇಕು ಎಂದು ತೋರಿಸಿಕೊಟ್ಟೆ

ನಮ್ಮ ನಾಯಕರು ನಿನ್ನ ಹೆಸರಿನಲ್ಲಿ ಸಂಘಟನೆ ಕಟ್ಟಿ

ತಮ್ಮ ಸ್ವಂತ ರಾಜಕೀಯ ಜೀವನಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ

ಇದರ ವಿರುದ್ಧ ಧ್ವನಿ ಎತ್ತದೆ ಸುಮ್ಮನೆ ಇರುವರು

ನನ್ನ ಜನ.

## ೩೨. ಕತ್ತಲಲ್ಲಿ ಓದುವ ಚಂದಿರ

ಗ್ರಂಥಾಲಯದಲ್ಲಿರುವ ಮೌನ ಸಿಂಹವೇ

ಶೂದ್ರರಿಗಾಗಿ ಓದುವುದನ್ನು ನಿಲ್ಲಿಸಲಿಲ್ಲ.

ಹೊರಗಡೆ ಬಿಟ್ಟರೆ ಮಾತಿನ ಸಿಂಹವೇ

ನಿನ್ನ ಮಾತು ತುಳಿತದಲ್ಲಿರುವರ ಧ್ವನಿಯಾಯಿತು.

ಎಲ್ಲರೂ ಊಟ ಮಾಡಿ ಮಲಗುವ ಸಮಯದಲ್ಲಿ

ನೀನು ಗ್ರಂಥಾಲಯವನ್ನು ಹುಡುಕುತ್ತಿರುವ ಚಂದಿರನಾದೆ,

ನೀನು ರಾತ್ರಿಯಲ್ಲ ಚಂದಿರನಾಗಿ ಓದಿದ ಫಲವೇ

ಸೂರ್ಯನಾಗಿ ಇಂದು ನಮಗೆ ಬೆಳಕು ಸಿಕ್ಕಿದೆ.

ನಿನಗೆ ಗುಣಮಟ್ಟದ ಶಿಕ್ಷಣ ಸಿಗಲಿಲ್ಲ

ಆದರೂ ಛಲ ಬಿಡದೇ ಕಲಿತೆ

ಶೋಷಿತರ ಧ್ವನಿಯಾಗಲು,

ಅದರಿಂದಾಗಿಯೇ ನಾವು ಉನ್ನತ ಶಿಕ್ಷಣ ಪಡೆದುಕೊಂಡು

ಸಮಾಜದಲ್ಲಿ ಉತ್ತಮ ಸ್ಥಾನ ಮಾನ ಪಡೆದುಕೊಂಡಿರುವೆವು.

ಮೈಯಲ್ಲಿ ಹರಕು ಬಟ್ಟೆ ಹಾಕಿಕೊಂಡು

ಕಣ್ಣಿಗೆ ಬೇಕಾಗಿರುವ ನಿದ್ದೆ ಬಿಟ್ಟೆ,

ಅದರ ಪ್ರತಿಫಲವೇ, ಹೊಟ್ಟೆ ತುಂಬಾ ಊಟ ಮಾಡಿ

ಕಣ್ಣು ತುಂಬಾ ನಿದ್ದೆ ಮಾಡುತ್ತಿರುವೇವು.

## ೩೩. ಸತ್ಯವಾಗ್ಲೂ...!

ಬುದ್ಧನ ನೀತಿ

ತತ್ವಗಳನ್ನು ಕೇಳುತ್ತಿರುವಾಗ

ಮರೆಯದಂತಾಯ್ತು

ಸತ್ಯದ ಮಾರ್ಗ

ಬಸವಣ್ಣನ ಜೀವನವನ್ನು

ಜನತೆಗೆ ಸಾರುತ್ತಿರುವಾಗ

ಮನಪರಿವರ್ತನೆಯಾಯ್ತು

ಸಮಾನತೆಯ ಮನೋಭಾವದಲ್ಲಿ

ಅಂಬೇಡ್ಕರ್ ನೆನಪಲ್ಲಿ

ಪುಸ್ತಕ ಓದುತ್ತಿರುವಾಗ

ನೆನಪಾಯಿತು

ಶೋಷಿತರ ಸಂಕಟ

## ೩೪. ತ್ರಿಬಿಗಳನ್ನು ಅನುಸರಿಸೋಣ

ಬನ್ನಿ ಬಂಧುಗಳೇ ಬನ್ನಿ

ತ್ರಿಬಿಗಳ ಹಾದಿಯಲ್ಲಿ

ನಡೆಯೋಣ ಬನ್ನಿ ||

ಶೋಷಣೆಯಿಂದ ಹೊರಬರಲು

ಜಾತಿಯಿಂದ ಮುಕ್ತರಾಗಲು

ತುಳಿತದಿಂದ ಮೇಲೆದ್ದೆಳಲು

ತ್ರಿಬಿ ದಾರಿಯನ್ನು ಅನುಸರಿಸೋಣ

ಬನ್ನಿ ಬಂಧುಗಳೇ ಬನ್ನಿ

ಜಾತಿಯನ್ನು ಹುಟ್ಟು ಹಾಕುತ್ತಿರುವರನ್ನು

ಕೋಮುವಾದವನ್ನು ಸೃಷ್ಟಿಸುತ್ತಿರುವರನ್ನು

ನಮ್ಮನ್ನು ಶೋಷಣೆ ಮಾಡುತ್ತ ಬದುಕುತ್ತಿರುವರನ್ನು

ಮನುಷ್ಯರನ್ನಾಗಿಸಲು ಮಾನವ ಧರ್ಮವನ್ನು ಮನಗಾಣಿಸಲು

ಹಂಚೋಣ ಬನ್ನಿ ಬಂಧುಗಳೇ ತ್ರಿಬಿ ವಿಚಾರಗಳನ್ನು

## ೩೫. ಬದಲಾಯಿಸುವಂತ ಶಕ್ತಿಗಳು

ನೀನು ಸರಿದಾರಿಯಲ್ಲಿ ಮುನ್ನಡೆಯಲು

ಬುದ್ಧನ ಜೀವನವನ್ನು ಕಾಣು

ನೀನು ಬದಲಾಗಲು ಬಯಸಿದರೆ

ಬಸವಣ್ಣನವರ ಬದುಕನ್ನು ಕಲಿ

ನೀನು ವಿಚಾರವಂತನಾಗಲು ಇಚ್ಛಿಸಿದರೆ

ಅಂಬೇಡ್ಕರ್ ರವರನ್ನು ಅಧ್ಯಯನ ಮಾಡು

## ೩೬. ಅಂಬೇಡ್ಕರ್ V/S ಸಾಮಾಜಿಕ ಜಾಲತಾಣದವರು

ಅಂಬೇಡ್ಕರ್ ರವರ ಕಾನೂನಾತ್ಮಕ ಹೋರಾಟವನ್ನು ಮರೆತು,

ಫೇಸ್ಬುಕ್ ಹೋರಾಟವನ್ನು ಮಾಡುತ್ತಿರುವರು.

ಅಂಬೇಡ್ಕರ್ ರವರ ಜಾತಿ ನಿರ್ಮೂಲನೆಯ ಚಳುವಳಿಯನ್ನು ಮರೆತು,

ಟ್ವಿಟ್ಟರ್ ಚಳುವಳಿಯನ್ನು ಆರಂಭಿಸಿರುವರು.

ಅಂಬೇಡ್ಕರ್ ರವರ ತರ ಪುಸ್ತಕ ಓದಿ ಎಂದರೆ,

ವಾಟ್ಸಪ್ ಯೂನಿವರ್ಸಿಟಿಯ ಲೇಖನಗಳನ್ನು ಓದುತ್ತಿರುವರು.

## ೩೭. ತಿಳಿಯೋಣ ಬನ್ನಿ

ಶಿಕ್ಷಣ ಪಡೆದು ಜ್ಞಾನಿಯಾಗಲು

ಮಾನವ ಧರ್ಮವನ್ನು ಅನುಸರಿಸುತ್ತ

ಮಾನವೀಯತೆಯಿಂದ ಬದುಕಲು

ಅಳವಡಿಸಿಕೊಳ್ಳೋಣ ತ್ರಿಬಿ ಮೂಲಸಿದ್ಧಾಂತಗಳನ್ನು

ಬನ್ನಿ ಬಂಧುಗಳೇ ಬನ್ನಿ

ನಮ್ಮನ್ನು ದ್ವೇಷ ಮಾಡುವರನ್ನು ಪ್ರೀತಿಸುವರಾಗಲು

ಅಸತ್ಯವನ್ನು ಖಂಡಿಸುವಂತ ಶಕ್ತಿ ಪಡೆಯಲು

ಅನ್ಯಾಯದ ವಿರುದ್ಧ ಧ್ವನಿ ಎತ್ತುವ ಮನಸ್ಥಿತಿ ಉಳ್ಳವರಾಗಲು

ಅನುಸರಿಸೋಣ ಬನ್ನಿ ತ್ರಿಬಿ ವಿಚಾರಗಳನ್ನು

ಬನ್ನಿ ಬಂಧುಗಳೇ ಬನ್ನಿ

ನಮಗಿಂತ ನಮ್ಮ ಸಮಾಜ ಮುಖ್ಯ

ಯಾರೇ ಇರಲಿ ಅವರನ್ನು ನಮ್ಮವರನ್ನಾಗಿ ಕಾಣಲು

ಪ್ರತಿಯೊಂದರಲ್ಲು ನಿಸ್ವಾರ್ಥದಿಂದ ಬದುಕುವಂತರಾಗಲು

# ೩೮. ಭೀಮನ ಡೋಂಗಿ ಅನುಯಾಯಿಗಳು

ದಲಿತರನ್ನು ದೋಚುತ್ತಿರುವರು

ಭೀಮನ ಡೋಂಗಿ ಅನುಯಾಯಿಗಳು.

ಭೀಮನ ಹೆಸರಲ್ಲಿ ಕಟ್ಟುತ್ತಿರುವರು

ಹೆಜ್ಜೆ,ಹೆಜ್ಜೆಗೊಂದು ಸಂಘಟನೆಯನ್ನು.

ಭೀಮನ ಹೆಸರಲ್ಲಿ ಮಾಡುತ್ತಿರುವರು ರಾಜಕೀಯ

ಓಣಿಗೊಂದು ಪಕ್ಷವನ್ನು ಕಟ್ಟಿ.

ಸಂಘಟನೆ ಕಟ್ಟಿದರು,ಪಕ್ಷ ಮಾಡಿದರು

ದಲಿತರನ್ನು ಶೋಷಣೆಯಿಂದ ಮುಕ್ತ ಮಾಡದೇ

ತಮ್ಮ ರಾಜಕೀಯ ಉನ್ನತಿಗಾಗಿ

ಮತ್ತಷ್ಟು ಶೋಷಣೆಗೆ ಒಳಪಡಿಸಿದರು,

ಭೀಮನ ಡೋಂಗಿ ಅನುಯಾಯಿಗಳು.

## ೩೯. ಪ್ರಸ್ತಾವನೆಯ ಪ್ರಾಮುಖ್ಯತೆ

ಟಿವಿ ಮಾಧ್ಯಮಗಳು ಒಂದೊತ್ತು

ಸಂವಿಧಾನದ ಬಗ್ಗೆ ತೋರಿಸಿದ್ದರೆ,

ಸಂವಿಧಾನಕ್ಕೆ ಸಮಾಜ ಅಗೌರವದಿಂದ

ನಡೆದುಕೊಳ್ಳುವುದನ್ನು ನಿಲ್ಲಿಸುತಿತ್ತು.

ಶಾಲೆಯಲ್ಲಿ ರಾಷ್ಟ್ರಗೀತೆಯ ಜೊತೆಗೆ

ಸಂವಿಧಾನದ ಪ್ರಸ್ತಾವನೆ ಹೇಳಿಸಿದ್ದರೆ,

ಶಿಕ್ಷಕರು ಅಂಬೇಡ್ಕರ್ ರವರನ್ನು  ಅಗೌರವದಿಂದ

ಕಾಣುವುದನ್ನು ನಿಲ್ಲಿಸುತ್ತಿದ್ದರು.

ಪಠ್ಯ ಪುಸ್ತಕದ ಮೊದಲ ಪುಟದಲ್ಲಿ

ಸಂವಿಧಾನದ ಪ್ರಸ್ತಾವನೆ ಮುದ್ರಿಸಿದ್ದರೆ,

ಮಕ್ಕಳಿಗೆ ಸಂವಿಧಾನ ಎಲ್ಲದಕ್ಕಿಂತ

ದೊಡ್ಡದು ಎನ್ನುವುದು ತಿಳಿಯುತಿತ್ತು.

ಅಂದು ಶಾಲೆಯಲ್ಲಿ ಮಕ್ಕಳಿಗೆ

ಸಂವಿಧಾನದ ಮಹತ್ವ ತಿಳಿಸಿದ್ದರೆ,

ಅವರು ಅಧಿಕಾರಿಗಳಾದ ನಂತರ

ಸರ್ಕಾರಿ ಕಚೇರಿಗಳಲ್ಲಿ ಸ್ವಾತಂತ್ರ್ಯ ದಿನದಂದು

ಅಂಬೇಡ್ಕರ್ ಚಿತ್ರವನ್ನು ಇಡುವುದು ಮರೆಯುತ್ತಿರಲಿಲ್ಲ.

( ಕೆಲವರಿಗೆ ಮಾತ್ರ ಅನ್ವಯಿಸುತ್ತದೆ )

## ೪೦. ನಿಸ್ವಾರ್ಥಿ ಅಂಬೇಡ್ಕರ್

ಶಾಲೆಯ ಗೋಡೆಯ ಮೇಲಿರುವ ಅಂಬೇಡ್ಕರ್

ನಿನ್ನ ಹೋರಾಟದ ಪ್ರತಿಫಲವಾಗಿ

ಇಲ್ಲಿನ ಬಡವರು ಬದುಕುತ್ತಿರುವರು

ಶಾಂತಿಯುತವಾಗಿ ನೆಮ್ಮದಿಯಿಂದ...!

ಕೆಲವು ವಿಕೃತ ಮನಸ್ಸಿನವರಿಗೆ

ವಿರೋಧಿಯಾಗಿ ಕಾಣುತ್ತಿರುವೆ.

ಕೋಟ್ಯಾಂತರ ಬಡಜೀವಗಳಿಗೆ

ದೇವರಾಗಿ ಕಾಣುತ್ತಿರುವೆ...!

ಆದರೆ, ಆ ವಿಕೃತ ಮನಸ್ಸುಗಳು

ನಿನ್ನನ್ನು ತಪ್ಪಾಗಿ ಅರ್ಥೈಸಿಕೊಂಡಿವೆ.

ಸರಿಯಾಗಿ ಅರ್ಥೈಸಿಕೊಂಡರೆ

ನಿನ್ನ ಹಾದಿಯನ್ನು ತುಳಿಯುತ್ತವೆ...!

ಕೋಟ್ಯಾಂತರ ಬಡಜೀವಗಳು

ನಿನ್ನನ್ನು ಓದಲು ಶುರು ಮಾಡಿದರೆ

ನಿನ್ನನ್ನು ದೇವರಾಗಿ ಕಾಣುವುದನ್ನು ಬಿಟ್ಟು

ಸಮಾಜಕ್ಕಾಗಿ ಬದುಕುವುದನ್ನು ಕಲಿಯುತ್ತವೆ....!